

गुणलक्ष परित्यज्य दोषं गृह्णाति दुर्जनः । धेनोः
पयोधरस्थोऽपि गोपीडो लोहिताशनः



ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ
ಬೇರೆ ಕಂಚಲ್ಲ, ಭಾಂಡ ಒಂದೆ,  ಭಾಜನ ಒಂದೆ,
ಬೆಳಗೆ ಕನ್ನಡಿಯೆನಿಸಿತ್ತಯ್ಯಾ,
ಅರಿದಡೆ ಶರಣ,  ಮರೆದಡೆ ಮಾನವ, ಮರೆಯದೆ
ಪೂಜಿಸು ಕೂಡಲಸಂಗನ



ಕಾಳಿಯ ಕಂಕಾಳದಿಂದ ಮುನ್ನ ತಿಪುರಸಂಹಾರದಿಂದ
ಮುನ್ನ
ಹರಿ ವಿರಿಂಚಿಗಳಿಂದ ಮುನ್ನ ಉಮೆಯ ಕಲ್ಯಾಣದಿಂದ
ಮುನ್ನ ಮುನ್ನ ಮುನ್ನ ಮುನ್ನ
ಅಂದಿಂಗೆಳೆಯ ನೀನು ಹಳೆಯ ನಾನು ಮಹಾದಾನಿ
ಕೂಡಲಸಂಗಮದೇವಾ



ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ; ಕುಂಬಾರನ
ಕಲಶಂಗಳಲ್ಲಿ ಕುಂಬಾರನಿಲ್ಲ; ಆವಿಗೆ ಕಲಶಂಗಳಲ್ಲಿ
ಅಸ್ತಿತ್ವ ಉಂಟಾಗಿಹ ಕುಂಬಾರ ಕಂಬಾರನಂತಿಪ್ಪ
ನೋಡಾ ಈ ಪ್ರಪಂಚದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ



ವಾರಿ ನಡೆಯುವಲ್ಲಿ ಗುರಿ ಮನಸ್ಸನ್ನೊಂದಿರುತ್ತದೆ;
ಕಣ್ಣನ್ನಲ್ಲ
--ಮುಳಿಯ ತಿಮ್ಮಪ್ಪಯ್ಯ (ನಾಡೋಜ ಪಂಪದ
ಪೀಠಿಕೆಯಲ್ಲಿ)



ನಮ್ಮ ಮನೆಯ ಬಾವಿಯಲ್ಲಿ ನೀರು ಊರ ಮುಂದಿನ ಕೆರೆಯಲ್ಲಿರುವಷ್ಟು ಇಲ್ಲ;ಆದರೆ ನಮ್ಮ ಮನೆಯವರ ಉಪಯೋಗಕ್ಕಾಗಿ ನೆರೆಮನೆಗೆ ಹೋಗಬೇಕಾದದ್ದಿಲ್ಲ.ಇದೂ ಒಂದು ಸಂತೋಷದ ವಿಷಯವಲ್ಲವೇ?

--ಡಿವಿಜಿ(ಮೈಸೂರಿನ ದಿವಾನರು)



ನಂಬುಗೆ ಬೇರ್ ದಾಕ್ಷಿಣ್ಯಂ
ಬಂಬಲ್ ದಯೆ ಪೂ ಗುಣಂಫಲಂ ತದ್ವಿನಯಂ|
ಕೊಂಬೆಗಳಾಗಿರೆ ಸೊಗದಿಂ
ತುಂಬದೆ ಸಾಧುತರುವಂ ಮಿತ್ರಖಗಂಗಳ್||
---ಗರಣಿ ಕೃಷ್ಣಮಚಾರ್ಯ (ಮೃಚ್ಛಕಟಿಕ)




ಬಸವಪ್ಪ ಶಾಸ್ತ್ರಿ (ಕರ್ಣಾಟಕ ಶಾಕುಂತಲಂ)



ಪರಿವುವು ಧೂಳಿಯಂತೆ ಮುಗಿಲಗ್ರದೆ
ಚೂರ್ಣಿತವಾಗಿ, ಚಿತ್ರದೊಳ್|
ಬರೆದವೊಲಾಡದಿರ್ಪುದು
ತುರಂಗಶಿರಸ್ಥಮುದಗ್ರಚಾಮರಂ||
ತಿರುಗುವಗಾಲಿಪುಟ್ಟಿಕುಮರಾಂತರದೊಳ್
ಪೆರತೊಂದರಾಳಿಯಂ|
ನಿರುಕಿಸೆ ನಿಂದುದೀ ರಥದ ವೇಗದೆ ನೆಟ್ಟನೆ
ಕೇತನಾಂಬರಂ||--
ಸೋಸಲೆ ಅಯ್ಯಶಾಸ್ತ್ರಿ (ಕರ್ಣಾಟಕ
ವಿಕ್ರಮೋರ್ವಶೀಯ)


ಬಿರಿಯುತಲೆ ಸೆರೆಹಿಡಿದೆ ಪುಷ್ಪಗಳ ಚೆಲುವ,
ಸೋತೆ ಸೌರಭವ ನಾ ತುಂಬಲಿಲ್ಲಿ;
ಸೃಷ್ಟಿಯ ರಹಸ್ಯವೇ ಹೀಗೆಯೇನೊ
ಗೆಲುವಿಗೂ ಸೋಲಿಗೂ ಸಮತೆಯೇನೊ?
----ವಿ ಗಣೇಶ್



ರಸವ ಸವಿಯುವವಗಂಗವಾವುದದು ? ಬುದ್ಧಿಯೇ
ಹೃದಯವೇ, ಅಲ್ಲದೊಡೆ ಮನವೆ ಮೈಯೆ ?
ರಸದೀಪ್ತಿಯಲಿ ಬುದ್ದಿ ಬೆಳಗಿ, ಹೃದಯವು ನಾಂದು,
ಮನಕರಗಿ ಮೈಯುಬ್ಬುವುದು--ಆತ್ಮನಲಿಯೆ,



ಡುಕ್ಕೆ ಬಿಡುವಿರಲು, ಕಂಡರಿಗೆ ಕೈಯಮುಗಿ,
ಯೊಂದೆ ತೆರವಿರಲು ಮಾಡೋ ಸಲಾಮು ;
ಡು ಕೈಗೂ ಕೆಲಸವಿರೆ ತಲೆಯ ಬಗ್ಗಿಸು ;
ಲು ಹೊರೆ ತಲೆಗೂ, ಮುಗುಳುನಗೆ ಬೀರು
ಎಂ ವಿ ಸೀತಾರಾಮಯ್ಯ


ನೀರವತೆಯ ರಜನಿಯಲ್ಲಿ,
ಮುಗುಳುನಗೆಯ ಸೂಸುತಿಲ್ಲಿ,
ಮೃದುಗಂಧವ ಪಸರಿಸುತ್ತ,
ತನಗೆ ತಾನೆ ಸಂತಸದೊಳು,
ಆತ್ಮರತಿಯ ತಳೆದಿದೆ,
ಸೃಷ್ಟಿ ಚೆಲುವ ಮೆರೆದಿದೆ-
--ವಿಗ



ತ್ತೆನ್ನದೆ ಬೇರೆನ್ನದ|

ತ್ತುಂ ಭಾಗಗಳಿಂದೆಯುಂ ಕುತ್ತುಗಳಂ||

ತ್ತುವ ಗಿಡುವವೊಲಕ್ಕುಂ|

ತ್ತುಗೊಳಲ್ ಸಿರಿ ಪರೋಪಕಾರಿಗಳೆಡೆಯೊಳ್||

ತಿರುಕ್ಕುರಳ್ ಅನುವಾದ-ರಾ.ನರಸಿಂಹಾಚಾರ್



ಸತ್ಯ-ಶಿವ-ಸುಂದರಂಗಳ್ ಪ್ರತ್ಯೇಕಗಳಲ್ತು, ವಸ್ತುವೇಕಂ
ತ್ರಿಮುಖಂ | ವಸ್ತುವದಾವುದು ಸತ್ಯಮೊ ಸ್ವಸ್ತಿದಮದು
ಸುಂದರಾಂಗಮದು ಶಾಂತಿಪದಂ||
--------ಡಿವಿಜಿ



ದಗುವುಮೆಂತುಟು ಮಾನಸ|
ದೇಹದೊಳ್ ನಿರ್ಮಲತ್ವಮಂಬುವಿನಿಂದಂ||
ದವಿಪುದಂತುಟಾತನ|
ೃದಯದೊಳಮಲತೆ ಯಥಾರ್ಥವಾದಿತೆಯಿಂದಂ||
----ತಿರುಕ್ಕುರಳ್ ಅನುವಾದ,ರಾ|ನರಸಿಂಹಾಚಾರ್



ದೊ ಅಳ್ಳಾಡದೆ ಅಲುಗದೆ ತಾವರೆ
ಲೆ ಮೇಲೆಸೆವುದು ಬೆಳ್ಳಕ್ಕಿ|
ಳೆದ ಪಚ್ಚೆ ಹರಿವಾಣದೊಳಿರಿಸಿದ
ಖದ ಚಿಪ್ಪಿನೊಲು||
ಗಾಥಾಸಪ್ತಶತಿ



ಕಂಗಳಿಂಗೆ ಚುಂಬಕಂ, ವರ್ಣರಹಿತ ಧವಳಿಮಂ;
ಸುಗಂಧಿತಂ ನಾಸಿಕಕ್ಕೆ , ರಮ್ಯಕಂ ಸುತ್ತೆಲ್ಲಕಂ;
ಮನಕೆ ಮುದೋಲ್ಲಾಸಕಂ , ಚಿತ್ತಶಾಂತಿದಾಯಕಂ;
ಸಾರ್ಥಕಂ ಸುಮವೆ ನಿನ್ನನಿತ್ತ ಗಿಡದ ಜೀವನಂ||
ವಿ.ಗಣೇಶ್



ಒಂದೂರೊಳ್ ನೆಲಸುವುದುಂ|
ಸಂದಿಸಿ ಪಲಸೂಳೊರಲ್ದು ಮಾತಾಡುವುದುಂ||
ಒಂದಿಸಲೇಂ ನೆರೆವುವೆ ಕೆಳೆ |
ಯಂ ದೊರೆಕೊಳಿಸಿ ಭಾವಸಾಮ್ಯಂ ನೆರೆಗುಂ||
-ರಾ.ನರಸಿಂಹಾಚಾರ್, (ತಿರುಕ್ಕುರುಳ್ ಅನುವಾದ
ನೀತಿಮಂಜರಿ)



ಮಿತ್ರಾಯ ಸೂರ್ಯಾಯ ಹಂಸಾಯ ಪೂಷ್ಣೇ ಸ|
ವಿತ್ರೇ ಜಗಚ್ಚಕ್ಷುಷೇ ಚಂಡಘೃಣಯೇ ಪ|
ವಿತ್ರಾಯ ಪಿಂಗಾಯ ಪುರುಷಾಯ ಭಾನವೇ
ಜ್ಯೋತಿಷೇ ಭಾಸ್ಕರಾಯ ||
ಸತ್ಯೈಕರೂಪಾಯ ವಿಮಲಾಯ ವಿಶ್ವರ|
ಕ್ಷಿತ್ರೇ, ಸಹಸ್ರಕಿರಣಾಯ ರವಯೇ ಮಂದ|
ಪಿತ್ರೇ ದಿವಾಕರಾಯ ಬ್ರಹ್ಮ ವಿಷ್ಣು ರುದ್ರಾತ್ಮನೇ ತುಭ್ಯಂ
ನಮಃ||
-ಜೈಮಿನಿ ಭಾರತ



ಸುರುಚಿರ ಚಾರಿತ್ರದಿನೀ|
ಧರಣಿಗೆ ಭೂಷಣಮೆನಿಪ್ಪ ಪಿರಿಯರ್ ಮರೆದುಂ||
ಪರರ ಹೃದಯಕ್ಕೆ  ನೋವಂ|
ದೊರೆಕೊಳಿಸುವ ನಿಷ್ಠುರೋಕ್ತಿಗಳನುಚ್ಚರಿಸರ್||
-ನೀತಿಮಂಜರಿ(ರಾ.ನರಸಿಂಹಾಚಾರ್)



ಪ್ರೇಮವಿಹೀನರ್ ತಮ್ಮಯ|
ಹೇಮಾದಿಗಳೆಲ್ಲಮಾತ್ಮಭೋಗಕ್ಕೆಂಬರ್||
ಪ್ರೇಮಾರ್ದ್ರಹೃದಯರಮಲೋ|
ದ್ದಾಮಗುಣರ್ ತಮ್ಮ ದೇಹಮುಂ ಪೆರರ್ಗೆಂಬರ್||

-ರಾ.ನರಸಿಂಹಾಚಾರ್ (ನೀತಿ ಮಂಜರಿ, ತಿರುಕ್ಕುರುಳ್ ಅನುವಾದ)



ತನಗೊಡರಿಸಿದುಪಕೃತಿಯೆ |
ಳ್ಳನಿತಾದೊಡಮದುವೆ ಬೆಟ್ಟದನಿತೆಂದೆರ್ದೆಯೊಳ್ ||
ನೆನೆಯುತ್ತುಂ ಗುಣಿ ಮನಮೊ|
ಲ್ದನವರತಂ ಕೊಂಡುಕೊನೆವನುಪಕಾರಕನಂ||
-ರಾ.ನರಸಿಂಹಾಚಾರ್ (ನೀತಿ ಮಂಜರಿ)



ನೆಲೆದಪ್ಪಿದೆಡೆಗಮತಿ ಸಂ
ಚಲಿಸಿರ್ದೆಡೆಗನ್ಯದೇಶಮಾದೆಡೆಗೆ ಖಳರ್|
ಮುಳಿದೆಡೆಗೆ ಬುದ್ಧಿ ವೇಳಲ್
ಕುಲವಧುವೇ ಕಾರಣಂ ಪರೀಕ್ಷೆಯಿದಲ್ತೆ ||

---ಚೌಂಡರಸ

ಚಿತ್ರ: ಶಂಕರ್, ಚಂದಮಾಮ



ಂಡ ದೃಶ್ಯಕ್ಕೆ ಕಾಣದ ಅಂತರಂಗದಲಿ ಇದ್ದೆ ಇರಬೇಕು
ೇಪಥ್ಯ ಮೂಲ,
ೂ ಚಿಕ್ಕೆ ಹೊತ್ತು ತೂಗುವ ದೃಶ್ಯಚೋದ್ಯಕ್ಕೆ ಕಣ್ಣ
ರೆಗಿದೆ ಬೇರ ಜಾಲ.

ಎನ್‌ಎಸ್ ಲಕ್ಷ್ಮೀನಾರಾಯಣ ಭಟ್ಟ



ಸಮವಯಸಂ ಸಮಸತ್ವಂ|
ಸಮಾನವಿಭವಂ ಸಮಾನಶೀಲವ್ಯಸನಂ||
ಸಮವಿದ್ಯಾವಿಭವಯುತಂ|
ಸಮಸುಖದುಃಖಂ ಸಹಾಯನಕ್ಕೆ ಸಖಾಯಂ||



ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ ತೇಯೆ
ಚಂದನಂ|
ಕುಡದೆ ಸುಗಂಧಮಂ ಪಿಳಿಯೆ ಕರ್ಬಿನಿದಾಗದೆ ಕಾಸೆ
ಕಾಂಚನಂ|| ಪಡೆಯದೆ ಕಾಂತಿಯಂ
ನಿಜದಿನೊಳ್ಳಿದರಪ್ಪವರೆಂತು ಬಾಧೆವ|
ಟ್ಟೊಡಮುಪಕಾರಮಂ ಪೆರರ್ಗೆ ಮಾಡದೆ
ಬಾಧೆಯನೇಕೆ ಮಾಡುವರ್|| --ನಾಗಚಂದ್ರ



ಬಾಗಿದೆಳೆಲತೆಯೊಳೊಂದೊಂದು ಮಿಡಿಗಾಯ್ದಿಡಿದ|
ಪೂಗೊಂಚಲಂ ಜಿನುಗುವಳಿವೆರಸಿ ತಂಗಾಳಿ |
ತೂಗುವಂತಬಲನಂ ತೊಟ್ಟಿಲೊಳ್ ಪಟ್ಟಿರಿಸಿ
ವನಿತೆಯರು ತೂಗಿ ಬಳಿಕ|| ಜೋಗುಳಂ
ಪಾಡಿಯಾಡಿಸುವ ನೊರೆವಾಲೆರೆವ|
ಸಾಗಿಸುವ ಸಂತೈಸುವೆತ್ತಿಕೊಂಬೆಲ್ಲಾ ನಿ|
ಯೋಗಕಾಂತೆಯರ ಕೈಯೊಳು ಬೆಳೆದನೊಲಿದು
ಶಿಶುವಾದಯ್ಯನಾದಯ್ಯನು||
--------ರಾಘವಾಂಕ(ಸೋಮನಾಥ ಚರಿತೆ)



ಾಷೆ ಗಾಡಿಯಿದ್ದ ಹಾಗೆ ; ಗೊಬ್ಬರದ ಗಾಡಿಯಲ್ಲಿ
ನ್ನದ ಗಟ್ಟಿಗಳನ್ನು ಹೇರಿಕೊಂಡು ಬಂದರೆ ಅವಕ್ಕೆ ಬೆ
ಿಮೆಯಾಗುತ್ತದೆಯೇ ? ಚಿನ್ನದ ಗಾಡಿ ಯಲ್ಲಿ
ೊಬ್ಬರವನ್ನು ಹೇರಿಕೊಂಡು ಬಂದರೆ ಅದಕ್ಕೆ ಬೆಲೆ
ರುತ್ತದೆಯೇ ? 'ಗಂಭೀರ' ಭಾಷೆ, 'ಗಂಡು'
ಾಷೆಯೆಂದು ಅನ್ಯಭಾಷೆಗಳಿಗೆ
ೋತುಬಿಡೋಣವೇ?

-ಬಿಎಂಶ್ರೀ



ಗಿದೆಳೆಲತೆಯೊಳೊಂದೊಂದು ಮಿಡಿಗಾಯ್ವಿಡಿದ|
ಗೊಂಚಲಂ ಜಿನುಗುವಳಿವೆರಸಿ ತಂಗಾಳಿ|
ಗುವಂತಬಲನಂ ತೊಟ್ಟಿಲೊಳ್ ಪಟ್ಟಿರಿಸಿ
ನಿತೆಯರು ತೂಗಿ ಬಳಿಕ||
ಗುಳಂ ಪಾಡಿಯಾಡಿಸುವ ನೊರೆವಾಲೆರೆವ|
ಗಿಸುವ ಸಂತೈಸುವೆತ್ತಿಕೊಂಬೆಲ್ಲಾ ನಿ|
ಗಕಾಂತೆಯರ ಕೈಯೊಳು ಬೆಳೆದನೊಲಿದು
ಶುವಾದಯ್ಯನಾದಯ್ಯನು||

----ರಾಘವಾಂಕ(ಸೋಮನಾಥ ಚರಿತೆ)



ಹುಲುಬಯಕೆ ಬಾ ಎನಲು, ಓ ಎಂದು ಬಾರದಿರು
ವಾತಾಪಿಯಂದದೊಳು ಬಾಳನೊಡೆದು.
ಮೊಗ್ಗಿನೊಳು ಕಂಪಂತೆ ಚೇತದೊಳು ಬಳೆಯುತ್ತ
ಸಮಯವರಿತರಳಿ ಬಾ, ಒಲವೆ ನಲಿದು-
ಇಂತೆಮ್ಮ ಬಿನ್ನಹವ ಮಾರ ಮನ್ನಿಸಲಿ,
ಆಮೋದಕಾಗುವೊಲು ಬಾಳನಾಗಿಸಲಿ !
---ಪುತಿನ(ಅಹಲ್ಯೆ)



ಸಳ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣ

ೂರ್ಣಮಂ|

ಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ

ೀ|

ಸಿ ಪೊಸತಪ್ಪ ಮಾಣಿಕದ ನುಣ್ಬರಲಂ ಮಧು

ನ್ಮಥಂಗೆ ಬ|

ಸಿ ಸಮೆದಂತೆ ತೋರುವುದು ಪೂಗಳೊಳೇಂ

ರಹೊನ್ನೆ ಚೆನ್ನಮೋ||



ುರುಹಿ ನಿಂದವು ಕೊಡಹಿದವು ಕೇ
ರವನಧ್ವಶ್ರಮದ ಢಗೆ ಪರಿ
ಿಸಿರಿಸೆ ನೀರೊಳು ಹೊಗಿಸಿದನು ಹರಿ ಹಯ
ತುಷ್ಟಯವ|
ರಸಿಯಲಿ ಮೊಗವಿಟ್ಟು ಮೊಗೆದವು
ರಜಲವನೆರಡಳ್ಳೆ ಹಿಗ್ಗಲು
ುರುಹಿದವು ಮುಖವನು ಮುರಾಂತಕ
ಿಯನಡರಿಸಿದ||



ಕರತಳದಿ ಮೈದಡವಿ ಗಾಯದ
ಸರಳ ಕಿತ್ತೌಷಧಿಯ ಲೇಪವ
ನೊರಸಿದನು ಕರಣದಲಿ ಚಪ್ಪರಿಸಿದನು ಕಂಧರವ|
ಹರುಷ ಮಿಗೆ ಕೊರಳೆತ್ತಿ ನಯನವ
ತಿರುಪಿ ದೇವನ ನೋಡುತುರ್ದುವು



ಕೊಳನ ತಡಿಯಲಿ ಹೂಡಿದನು ಶರ
ವಳಯದಲಿ ಚಪ್ಪರವನಾತನ
ಬಲುಹ ಕಂಡಸುರಾರಿ ಮೆಚ್ಚಿದನಡಿಗಡಿಗೆ ಹೊಗಳಿ||
ಕಳಚಿ ನೊಗವನು ತೆಗೆದು ಕಬ್ಬಿಯ
ನಿಳುಹಿ ಪಡಿವಾಘೆಗಳ ಸರಿದನು
ಕೊಳಿಸಿ ಪಿಡಿಯಲು ಪಾಡಿಗೈದವು ಮರಳಿದೆಡಬಲಕೆ||




---ಮುಪ್ಪಿನ ಷಡಕ್ಷರಿ

ಚಿತ್ರ-ವಡ್ಡಾದಿ ಪಾಪಯ್ಯ



ಎನ್ನ ಪಾಡೆನಗಿರಲಿ , ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ.
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ
---ದ.ರಾ.ಬೇಂದ್ರೆ



ಾನದೊಳು ಮೌನವನು,ಶಕ್ತಿಯೊಳು
ಹನೆಯನು,ತ್ಯಾಗದೊಳು ನಿಃಸ್ತುತಿಯನು|
ೂಡಿಸಿರಲವಿರೋಧದಿಂದಿರುವ ಗುಣಗಳಿವು,
ಡಹುಟ್ಟುಗಳ ತೆರದೊಲಿದವು||
ಕನ್ನಡ ರಘುವಂಶ,ಎಸ್.ವಿ.ಪಿ



ಸತ್ಯ ಜ್ಞಾನ ಮೌನ ತಪವು
ನಿತ್ಯ ಕ್ಷಮೆಯು ದಮೆಯು ಶಾಂತಿ
ಉತ್ತಮತ್ವವಿರಲು ಪಕ್ವವೆಂದು ತಿಳಿವುದು|
ಒತ್ತಿ ನೋಡಲವರ ಮನವ
ಮತ್ತೆ ಬೈಯ್ದು ಹೊಯ್ದು ನೋಡೆ
ಚಿತ್ತದಲ್ಲಿ ಸ್ವಸ್ಥವಾಗಿ ಕಲಕದಿರ್ಪುದು||
---ಮುಪ್ಪಿನ ಷಡಕ್ಷರಿ




ಸರಿಲ್ಲದಲರುಗಳು

ಳ್ಬಯಲಿನಲ್ಲಿ;

ಸುನಗುತ ನಲಿಯುವವು

ಳ್ಪರಿರದಲ್ಲಿ;

ರ್ವಗೌರವವಿನಿಸುಮರಿಯದಿವುಗಳನು

ರಿಮರತು ನಿರವಿಸಿದನೊ ವಿರಿಂಚನನು!--ಡಿವಿಜಿ



ಬಿರಿದಳಿವ ಹೂವೇಕೆ?
ಕಿರಬಾಳದೇಕೆ?
ಮರೆವಿಗಾಹುತಿಯಪ್ಪ
ಕಿರುಗವಿತೆಯೇಕೆ?
ಎಡೆಯುಂಟು ಸೃಷ್ಟಿಯುದ್ಯಾನದೊಳಗೆ
ಬಡಹೂವು,ಬಡಹಾಡು,ಬಡಬಾಳುಗಳಿಗೆ
---ಡಿವಿಜಿ



ಕೆಳೆಯನನೊರ್ವನನಿಳೆಯೊಳ್|
ಗಳಿಸಿದವಂ ಜನಿಸಿ ಧನ್ಯನಾದಂ ನಿಜದಿಂ||
ಕೆಳೆಯನ ಬಳಮಿಲ್ಲದವಂ |
ಕಳೆದರ್ಥಮನರ್ಥಮಾಗಿ ಜೀವಿಸುತಿರ್ಪಂ||



ಶೆಯ ಕೌಮುದಿ; ಬಾನಬಯಲಗಡಲಿನ ನೌಕೆ

ರು ಕಾಲಕು ತೇಲಿ; ಮಲೆಯ ಜಡೆಯಲಿ ಮೂಡಿ

ೂಸಿ ಸೌಸವ; ಇರವೆ? ಮಾತು ಬೇಕೇ ಏಕೆ?........



......

ಾತು ಮೌನದ ಪ್ರತಿಮೆ; ಮೌನ ಮಾತಿನ ದೈವ.

---ದ.ರಾ.ಬೇಂದ್ರೆ



ಕವಿ ಜೀವದ ಬೇಸರ ಹರಿಸ್ಯಾಕ
ಹಾಡ ನುಡಿಸ್ಯಾಕ
ಹೆಚ್ಚಿಗೇನು ಬೇಕ?
ಒಂದು ಹೂತ ಹುಣಸಿ ಮರ ಸಾಕ
---ಹೂತಽದ ಹುಣಸಿ-ದ.ರಾ.ಬೇಂದ್ರೆ



ವನಮಂ ಸುಡುವಗ್ನಿಗೆ ವಾ|
ಯುನೆಂಟನದೆ ದೀಪನಾಶಮಂ ಮಾಡುವವೊ||
ಲ್ಘನ ತೇಜಂ ಕಿಡೆ ಕಮಠಂ|
ಗನುಕೂಲ ಜನಾಳಿಯಾಯ್ತು ತಾಂ ಪ್ರತಿಕೂಲಂ||
--ಪಾರ್ಶನಾಥ ಚಂಪೂ,ಜಿಪಿ ರಾಜರತ್ನಂ



ಇರಲು ನಿಮಿಷದೊಳಸುರರಿಪು ಮೈ|
ಮುರಿದುವುಪ್ಪವಡಿಸಿದನಿದಿರೊಳು|
ಸುರಪತಿಯ ಸೂನುವನು ಕಂಡನು ನಗೆಯ ಮೊಳೆ
ಮಿನುಗೆ||
ತಿರುಗಿ ನೋಡುತೆ ತಲೆಯ ದೆಸೆಯೊಳು|
ಕುರುಕುಲೇಶ್ವರನತಿವಿಕಾರಿತೆ|
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ||

ಚಿತ್ರ--ಎಂಟಿವಿ ಆಚಾರ್ಯ, ಚಂದಮಾಮ



ಭರದ ಭಾರಣೆಯಲಿ ಚತುರ್ದಶಿ|
ಯಿರುಳು ಮಗಧನ ಬಾಹುಸತ್ವದ|
ಮುರಿವು ಮೊಳೆತುದು ಶೌರ್ಯ ಸೆಡೆದುದು ಭಯದ
ಬಿಗುಹಿನಲಿ||
ಉರುಪರಾಕ್ರಮತೇಜ ಪಡುವಣ|
ತರಣಿಯಾದುದು ಧಟ್ಟಣೆಯ ಧರ|
ಧುರಕೆ ನಿರ್ದ್ರವಜಿಹ್ವೆಯಾದುದು ನಿಮಿಷನಿಮಿಷದಲಿ||
ಚಿತ್ರ--ಎಂಟಿವಿ ಆಚಾರ್ಯ, ಚಂದಮಾಮ



ಶಿವನೊಳಪೊಕ್ಕು ಮಿಕ್ಕಲರ್ದು ಸೊರ್ಕಿ
ಸೊಗಂಪಡೆದುರ್ವಿ ಪರ್ವಿ ಬಾ|
ಹ್ಯವಿಷಯವೃತ್ತಿಯಂ ಮರೆದು ಜುಮ್ಮನೆ ಕೂರ್ತು
ಬೆಮರ್ತು ನೇತ್ರ ಸಂ|
ಭವಭಾಷ್ಪದಿಂ ನನೆದು ಪೊಂಪುಳಿವೋಗಿ ಪೊದಳ್ದ
ಭಕ್ತಿಯು|
ತ್ಸವರಸದೊಳ್ಮುಳುಂಗಿ ಸುಖಮಿರ್ದನೊರಲ್ದು
ವೃಷಾಧಿನಾಯಕಂ
---ಷಡಕ್ಷರಿ




ಕರ್ಣಾಟಕ ಶಾಕುಂತಲ

ಚಿತ್ರ-ಶಂಕರ್,ಚಂದಮಾಮ




--ಸಂಗವಿಭು

ಚಿತ್ರ-ವಡ್ಡಾದಿಪಾಪಯ್ಯ,ಚಂದಮಾಮ



ಜನನೀ ತಮೋವಿಮೋಚನ ವಿಲೋಚನ ರೋಚಿಗಳಿಂ
ಮಹೇಶನಾ|
ನನ ಸರಸೀರುಹಾಬ್ಜ,ಶತಪತ್ರ,ಕುಶೇಶಯ,ಪದ್ಮ
ಮೋದ ಸಂ|
ಜನಿಸೆ ಪರಾಗಕೇಸರಿಗಳಂತೆ
ವಿಭೂತಿಜಟಾರುಣತ್ವಗಳ್|
ಮನಸಿಗೆ ಮಂಗಳ ಬೆರೆಯೆ ಮೆಚ್ಚಿಸಿದೌ
ಭುವನ್ನೈಕದಾಯಕೀ||
--ಸಂಗವಿಭು



ಬಿದಿ ನೆರೆ ಪುಟ್ಟಿಪಂ ಪೊರೆವ ಕಾರೊಡಲಂ
ಕಿರುಗಣ್ಣಿನೊಪ್ಪಿಪಂ|
ತುದಿಗೆ,ವಿಚಿತ್ರವಮ್ಮ ಬಹುನಾಯಕರೇರಿದ ಬಂಡಿ
ಸಾಗದೆಂ|
ಬುದು ನಿಜಮೀ ಗುಣತ್ರಯಗಳಾದಿ ಚಿದ್ವೈಕ
ಸಕರ್ತೃಕಂಗಳೋ|
ತದಿತರಮೇಕಮೇವಮದು ಬೊಮ್ಮಮದೌ
ಭುವನೈಕನಾಯಕೀ||

--ಸಂಗವಿಭು

ಚಿತ್ರ-ಶಂಕರ್,ಚಂದಮಾಮ



ಒಳ್ಳೆಯ ವಂಶದಲ್ಲಿ ಹುಟ್ಟಿದವರಿಗೆ ಸೌಜನ್ಯವೇ
ಕಬ್ಬಿಣದ್ದಲ್ಲದ ಸಂಕೋಲೆ
--ಹರ್ಷಚರಿತೆ

ಚಿತ್ರ :ವಡ್ಡಾದಿ ಪಾಪಯ್ಯ,ಚಂದಮಾಮ



ಪೂವದೆ ಕಾಯ್ವ ಮರಂಬೋಲ್
ಭಾವಜ್ಞಂ ಪೇಳದಿರ್ದೊಡಂ ಬಗೆಯರಿವಂ|
ಗಾವಿಲನೊರೆದೊಡಮರಿಯಂ
ಭಾವಮನೇಗೆಯ್ದುಮಂಕುರಿಸದೊನಕೆಯವೋಲ್||
ನೀತಿಮಂಜರಿ

ಚಿತ್ರ-ವಡ್ಡಾದಿ ಪಾಪಯ್ಯ, ಚಂದಮಾಮ



ಮೊದಲಲರ್ದು ಬಳಿಕ್ಕಂ ಮುಗು
ಳದ ಮರವೂವಂತಿರೇಕವಿಧಮಪ್ಪುದೆ ಸೌ|
ಹೃದಮೆನಿಕುಂ ನೀರ್ವೂವ್ರೋಲ್
ಮೊದಲಲರ್ದು ಬಳಿಕ್ಕೆ ಮುಗುಳ್ವುದೇಂ ಕೆಳೆತನವೇ||
ನೀತಿಮಂಜರಿ.